## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 1388

ಸದಸ್ಯರ ಹೆಸರು : ಶ್ರೀ ಎಂ.ನಾರಾಯಣಸ್ವಾಮಿ

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 24.12.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಕೋವಿಡ್-19 ನಿಂದಾಗಿ 2020 ಮತ್ತು 2021 ಸಾಲಿನಲ್ಲಿ ಕೆ.ಎಸ್.ಆರ್.ಟಿ.ಸಿ ಮತ್ತು ಬಿ.ಎಂ.ಟಿ.ಸಿ ಗೆ ಸೇರಿದ ಎಷ್ಟು ಜನ ಸಿಬ್ಬಂದಿ ಸಾವಿಗೀಡಾಗಿದ್ದಾರೆ ; | ರಾಜ್ಯದಲ್ಲಿ ಕೋವಿಡ್-19 ನಿಂದಾಗಿ 2020 ಮತ್ತು 2021 ಸಾಲಿನಲ್ಲಿ ಕೆ.ಎಸ್.ಆರ್.ಟಿ.ಸಿ ಮತ್ತು ಬಿ.ಎಂ.ಟಿ.ಸಿ ಗೆ ಸೇರಿದ ಸಿಬ್ಬಂದಿಯ ಸಂಖ್ಯೆ ಈ ಕೆಳಕಂಡಂತಿದೆ:- |

| ನಿಗಮ | ಮೊದಲ ಅಲೆ (ಏಪ್ರಿಲ್ 2020 ರಿಂದ ಮಾರ್ಚ್ 2021ರವರೆಗೆ) | ಎರಡನೇ ಅಲೆ (ಏಪ್ರಿಲ್ 2021ರಿಂದ ಇಲ್ಲಿಯವರೆಗೆ) | ಒಟ್ಟು |
|---|---|---|---|
| ಕ.ರಾ.ರ.ಸಾ.ನಿಗಮ | 39 | 58 | 97 |
| ಬೆಂ.ಮ.ಸಾ.ಸಂಸ್ಥೆ | 39 | 70 | 109 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ. | 2020 ಮತ್ತು 2021 ಸಾಲಿನಲ್ಲಿ ಕರ್ತವ್ಯ ನಿರತರಾಗಿದ್ದಾಗ ಕೋವಿಡ್ ನಿಂದ ಮೃತರಾದ ಕೆ.ಎಸ್.ಆರ್.ಟಿ.ಸಿ ಮತ್ತು ಬಿ.ಎಂ.ಟಿ.ಸಿ ಸಿಬ್ಬಂದಿಗೆ ಪರಿಹಾರ ನೀಡಲಾಗಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು ) | ಕ.ರಾ.ರ.ಸಾ.ನಿಗಮ:-<br>ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದಲ್ಲಿ ಕೋವಿಡ್-19 ಸಾಂಕ್ರಾಮಿಕ ರೋಗಕ್ಕೆ ತುತ್ತಾಗಿ ಚಿಕಿತ್ಸೆ ಫಲಕಾರಿಯಾಗದೇ ಒಟ್ಟು 97 ನೌಕರರು ಮೃತಪಟ್ಟಿರುವುದಾಗಿ ವರದಿಯಾಗಿದ್ದು, ಮೊದಲನೇ ಅಲೆಯಲ್ಲಿ ಮೃತಪಟ್ಟ ನೌಕರರ ಪೈಕಿ, ಸಾಂಕ್ರಾಮಿಕ ರೋಗದ ಸೋಂಕು ತಗುಲಿ ರೋಗದ ಲಕ್ಷಣಗಳು ಕಾಣಿಸಿಕೊಳ್ಳುವ 14 ದಿವಸಗಳ ಅವಧಿಯಲ್ಲಿ (incubation period) ಕನಿಷ್ಠ 10 ದಿವಸಗಳು ಮತ್ತು ಅದಕ್ಕೂ ಹೆಚ್ಚಿನ ದಿವಸಗಳ ಕರ್ತವ್ಯ ನಿರ್ವಹಿಸಿದ್ದ ಏಳು (7) ನೌಕರರ ಕುಟುಂಬದವರಿಗೆ ದಿನಾಂಕ:-26.02.2021ರಂದು ಮಾನ್ಯ ಮುಖ್ಯಮಂತ್ರಿಗಳಿಂದ ತಲಾ ರೂ.30.00 ಲಕ್ಷಗಳ ಪರಿಹಾರದ ಚೆಕ್‌ಗಳನ್ನು ವಿತರಿಸಲಾಗಿದೆ.<br>ಬೆಂ.ಮ.ಸಾ.ಸಂಸ್ಥೆ:-<br>ಸಂಸ್ಥೆಯಲ್ಲಿ ಕೋವಿಡ್‌ನಿಂದ ಮೃತಪಟ್ಟ ನೌಕರರ ವಾರಸುದಾರರಿಗೆ ಸಂಸ್ಥೆಯಿಂದ ನೀಡಬೇಕಾಗಿದ್ದ ಉಪಧನ, ರಜೆ ನಗದೀಕರಣ, ರೂ.3.00 ಲಕ್ಷ ಇಲಾಖಾ ಗುಂಪು ವಿಮಾ ಪರಿಹಾರ, ಭವಿಷ್ಯ ನಿಧಿ, ಸ್ವಯಂಪ್ರೇರಿತ ಭವಿಷ್ಯ ನಿಧಿ ಮತ್ತು ವೈದ್ಯಕೀಯ ವೆಚ್ಚಗಳನ್ನು ಪಾವತಿಸಲಾಗಿದೆ. ಸಂಸ್ಥೆಯಿಂದ ಸದರಿ ನೌಕರರ ವಾರಸುದಾರರಿಗೆ ನೀಡಬೇಕಾದ ಆರ್ಥಿಕ ಪರಿಹಾರ ಯಾವುದೂ ಬಾಕಿ |

| | | |
|---|---|---|
| | | ಇರುವುದಿಲ್ಲ.<br><br>ಕೋವಿಡ್-19ರಿಂದ ಮೃತರಾದ ಸಾರಿಗೆ ಸಂಸ್ಥೆಗಳ ನೌಕರರ ಕುಟುಂಬದವರಿಗೆ ತಲಾ ರೂ.30.00 ಲಕ್ಷಗಳ ಪರಿಹಾರ ನೀಡುವ ಕುರಿತು ಆರ್ಥಿಕ ಇಲಾಖೆಯು ಈಗಾಗಲೇ ವೇತನ ಪಾವತಿಗಾಗಿ ಅನುದಾನ ಬಿಡುಗಡೆಗೊಳಿಸಿರುವುದರಿಂದ, ಸಂಸ್ಥೆಗಳ ಆಂತರಿಕ ಸಂಪನ್ಮೂಲದಿಂದ ಭರಿಸುವಂತೆ ಅಭಿಪ್ರಾಯಿಸಿರುತ್ತದೆ.<br><br>ಅಲ್ಲದೆ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)ಯನ್ನು ಕೋರಲಾಗಿ, ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಒದಗಿಸಲು ಯಾವುದೇ ವ್ಯವಸ್ಥೆ ಇರುವುದಿಲ್ಲ ಎಂದು ಅಭಿಪ್ರಾಯಿಸಿರುತ್ತದೆ.<br><br>ಆದ್ದರಿಂದ, ಕೋವಿಡ್-19ರ ಸಾಂಕ್ರಾಮಿಕ ರೋಗದಿಂದ ಮೃತಪಟ್ಟ ನೌಕರರ ಅವಲಂಬಿತರಿಗೆ ನಾಲ್ಕೂ ಸಾರಿಗೆ ಸಂಸ್ಥೆಗಳು ತಮ್ಮ ಆಂತರಿಕ ಸಂಪನ್ಮೂಲಗಳಿಂದ ಪರಿಹಾರ ಮೊತ್ತವನ್ನು ವಿತರಿಸಲು ತಿಳಿಸಲಾಗಿದೆ. |
| ಇ. | ಕೆ.ಎಸ್.ಆರ್.ಟಿ.ಸಿ ಮತ್ತು ಬಿ.ಎಂ.ಟಿ.ಸಿ ಸಿಬ್ಬಂದಿಯ ಕರ್ತವ್ಯ ನಿರತರಾಗಿದ್ದಾಗ ಮೃತರಾದರೆ ಅವರ ಕುಟುಂಬಕ್ಕೆ ಸಿಗುವ ಪರಿಹಾರಗಳು ಯಾವುವು? (ಮಾಹಿತಿ ನೀಡುವುದು) | ಕ.ರಾ.ರ.ಸಾ.ನಿಗಮ<br><br>ನಿಗಮದ ನೌಕರರು ಸೇವೆಯಲ್ಲಿರುವಾಗ ಮೃತಪಟ್ಟಲ್ಲಿ ಅವರ ಕುಟುಂಬದವರು ಕೆಳಕಂಡ ಪರಿಹಾರಗಳನ್ನು ಪಡೆಯುವರು :<br><br>• ಭವಿಷ್ಯ ನಿಧಿ, ಐಚ್ಛಿಕ ಭವಿಷ್ಯನಿಧಿ (ಸದಸ್ಯರಾಗಿದ್ದಲ್ಲಿ), ಉಪದನ, ರಜೆ ನಗಧೀಕರಣ, ಮರಣ-ವ-ನಿವೃತ್ತಿ ಯೋಜನೆಯ ಪರಿಹಾರ, ಭವಿಷ್ಯ ನಿಧಿಯ ವಿಮಾ ಪರಿಹಾರ, ಕುಟುಂಬ ಪಿಂಚಣಿ ಯೋಜನೆ (ಅವಲಂಬಿತರ ಪತ್ನಿ ಜೀವಿತಾವಧಿಯವರೆಗೆ ಹಾಗೂ 2 ಮಕ್ಕಳಿಗೆ 25 ವರ್ಷ ತುಂಬುವವರೆಗೆ) ಮತ್ತು ಸದರಿ ನೌಕರರು ಇಲಾಖಾ ವಿಮಾ ಯೋಜನೆಯ ಸದಸ್ಯರಾಗಿದ್ದಲ್ಲಿ ನೌಕರರ ಕುಟುಂಬ ಕಲ್ಯಾಣ ಯೋಜನೆಯ ಪರಿಹಾರವನ್ನು ಪಡೆಯುವರು.<br>• ಅವಲಂಬಿತರಲ್ಲಿ ಒಬ್ಬರು ನಿಯಮಾವಳಿ ಅನುಸಾರ ವರಿಷ್ಠತೆ ಮತ್ತು ಅರ್ಹ ಹುದ್ದೆ ಲಭ್ಯತೆ ಅನುಗುಣವಾಗಿ ಅನುಕಂಪದ ಆಧಾರದ ಮೇಲೆ ಉದ್ಯೋಗವನ್ನು ಪಡೆಯುವರು.<br>• ಅಲ್ಲದೇ, ಕರ್ತವ್ಯ ನಿರತ ಅಪಘಾತದಲ್ಲಿ ಭಾಗಿಯಾಗಿ ಮೃತಪಟ್ಟ ಸಂದರ್ಭದಲ್ಲಿ ಅವರ ಚಿಕಿತ್ಸಾ ಅವಧಿ ಮತ್ತು ವಿಶ್ರಾಂತಿ ಅವಧಿಯನ್ನು ಹಾಜರಾತಿ ಎಂದು ಪರಿಗಣಿಸಿ ಪೂರ್ತಿ ಸಂಬಳ ನೀಡಲಾಗುವುದು ಮತ್ತು ವೈದ್ಯಕೀಯ ವೆಚ್ಚವನ್ನು ಸಂಪೂರ್ಣವಾಗಿ ನಿಗಮದಿಂದಲೇ ಭರಿಸಲಾಗುವುದು.<br>• ಕರ್ತವ್ಯ ನಿರತ ಅಪಘಾತದಲ್ಲಿ ಭಾಗಿಯಾಗಿ ಮೃತಪಟ್ಟ ನೌಕರರ ಅವಲಂಬಿತರಿಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಅನುಕಂಪದ ಆಧಾರದ ಮೇಲೆ ಉದ್ಯೋಗ ನೀಡುವ ಸಲುವಾಗಿ |

| | | |
|---|---|---|
| | | ಪ್ರತ್ಯೇಕ ವರಿಷ್ಠತೆಯನ್ನು ನಿರ್ವಹಿಸಲಾಗುತ್ತಿದೆ.<br>• ಎಲ್.ಐ.ಸಿ. ಮುಖಾಂತರ ಇ.ಡಿ.ಎಲ್.ಐ. ಪರಿಹಾರ<br>• ಕರ್ತವ್ಯನಿರತ ಸಮಯದಲ್ಲಿ ಅಪಘಾತದಿಂದ ನಿಧನರಾದ ಪಕ್ಷದಲ್ಲಿ ಕಾರ್ಮಿಕ ಪರಿಹಾರ ಕಾಯ್ದೆಯನ್ವಯ ದಿವಂಗತ ನೌಕರರ ವಯಸ್ಸಿಗನುಗುಣವಾಗಿ ಲೆಕ್ಕಾಚಾರ ಮಾಡಿ, ಕಾರ್ಮಿಕ ಪರಿಹಾರ ನೀಡಲಾಗುವುದು. |

ಸಂಖ್ಯೆ: ಟಿಡಿ 307 ಟಿಸಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು